ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ನಗರೋತ್ಥಾನ ಯೋಜನೆಯಲ್ಲಿ ಅವ್ಯವಹಾರ ನಡೆದಿರುವ ಬಗ್ಗೆ

ಶ್ರೀ ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1568 (1822) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಳೆದ 5 ವರ್ಷಗಳಲ್ಲಿ ಕಾರವಾರ ಜಿಲ್ಲೆಗಳ ನಗರೋತ್ಥಾನ ಯೋಜನೆಗಳಿಗೆ ಮಂಜೂರಾದ ಅನುದಾನ ಎಷ್ಟು ;

(ಆ) ಕಾಮಗಾರಿಗಳ ಅನುಷ್ಠಾನಕ್ಕಾಗಿ ಯಾವ ಗುತ್ತಿಗೆದಾರರನ್ನು ಅಥವಾ ಏಜೆನ್ಸಿಯವರನ್ನು ನೇಮಕ ಮಾಡಲಾಗಿದೆ ; (ತಾಲ್ಲೂಕುವಾರು /ಜಿಲ್ಲಾವಾರು ಸವಿಸ್ತಾರ ವರದಿ ನೀಡುವುದು)

(ಇ) ನಿಗದಿತ ಅವಧಿ ಒಳಗೆ ಕಾಮಗಾರಿ ಪೂರ್ಣಗೊಳಿಸಲಾಗುವುದೇ; ಹಾಗಿದ್ದಲ್ಲಿ, ಗುತ್ತಿಗೆ ಕರಾರಿನ್ವಯ ಕಾಮಗಾರಿಗಳನ್ನು ಮುಕ್ತಾಯಗೊಳಿಸಲು ಸೂಚಿಸಿದ ದಿನಾಂಕವನ್ನು ಕಾಮಗಾರಿವಾರು ನೀಡುವುದು ; (ತಾಲ್ಲೂಕುವಾರು/ಜಿಲ್ಲಾವಾರು ಮಾಹಿತಿ ನೀಡುವುದು)

(ಈ) ಸದರಿ ಕಾಮಗಾರಿಗಳಲ್ಲಿ ಬಹಳಷ್ಟು ಅವ್ಯವಹಾರ ಆಗಿರುತ್ತದೆಯೆಂದು ತಿಳಿದು ಬಂದಿದ್ದು, ಇದಕ್ಕೆ ಹೊಣೆಗಾರರು ಯಾರು ; ಸಂಬಂಧಿಸಿದವರ ಮೇಲೆ ಸರ್ಕಾರ ಸೂಕ್ತ ಕ್ರಮ ಕೈಗೊಳ್ಳುವುದೇ ? (ವಿವರ ನೀಡುವುದು)